# ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರ ಹೆಸರು : ಶ್ರೀ ಹೆಚ್.ಎಂ. ರಮೇಶ ಗೌಡ (ವಿಧಾನಸಭೆಯಿಂದ ಚುನಾಯಿತರಾದವರು)

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 378

ಉತ್ತರ ದಿನಾಂಕ : 06.03.2020

| ಕ್ರ ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ. | ಕಳೆದ ಮೂರು ವರ್ಷಗಳಲ್ಲಿ ರಾಜ್ಯದಲ್ಲಿ ಮಂಜೂರಾಗಿರುವ ಶುದ್ಧ ಕುಡಿಯುವ ನೀರಿನ ಘಟಕಗಳೆಷ್ಟು; ಪ್ರಸಕ್ತ ಸಾಲಿನಲ್ಲಿ ಎಷ್ಟು ಘಟಕಗಳಿಗೆ ಮಂಜೂರಾತಿ ನೀಡಿ ಕಾಮಗಾರಿ ಪ್ರಾರಂಭಿಸಲಾಗಿದೆ; (ಜಿಲ್ಲಾವಾರು ವಿವರ ನೀಡುವುದು) | ರಾಜ್ಯ ಗ್ರಾಮೀಣ ಜನವಸತಿಗಳಲ್ಲಿ ಕಳೆದ ಮೂರು ವರ್ಷಗಳಲ್ಲಿ ನೀರು ಶುದ್ಧೀಕರಣ ಘಟಕಗಳನ್ನು ಅನುಷ್ಠಾನಗೊಳಿಸಲು ಮಂಜೂರು ಮಾಡಿರುವ ವಿವರವನ್ನು **ಅನುಬಂಧ-1ರಲ್ಲಿ** ನೀಡಿದೆ.<br>ಪ್ರಸಕ್ತ ಸಾಲಿನಲ್ಲಿ (2019-20ನೇ ಸಾಲಿನಲ್ಲಿ) ಚಿಕ್ಕಬಳ್ಳಾಪುರ ಜಿಲ್ಲೆಯ ಕಲುಷಿತ ಹೊಂದಿದ ಜನವಸತಿಗಳಲ್ಲಿ 43 ನೀರು ಶುದ್ಧೀಕರಣ ಘಟಕಗಳನ್ನು ಅಳವಡಿಸಲು ಅನುಮೋದನೆ ನೀಡಿದ್ದು, 42 ಘಟಕಗಳ ಕಾಮಗಾರಿ ವಿವಿಧ ಹಂತದಲ್ಲಿ ಪ್ರಗತಿಯಲ್ಲಿರುತ್ತದೆ. |
| ಆ. | ತುಮಕೂರು ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳ ಗ್ರಾಮೀಣ ಪ್ರದೇಶಗಳಲ್ಲಿ ಫ್ಲೋರೈಡ್ ಯುಕ್ತ ನೀರಿನಿಂದ ಜನ ಆರೋಗ್ಯದ ಸಮಸ್ಯೆಗಳಿಗೆ ತುತ್ತಾಗುತ್ತಿರುವ ಹಿನ್ನಲೆಯಲ್ಲಿ ಆ ಭಾಗಗಳಲ್ಲಿ ಕುಡಿಯುವ ಶುದ್ಧ ನೀರಿನ ಘಟಕ ಸ್ಥಾಪನೆಗೆ ಸರ್ಕಾರ ಯಾವ ಕ್ರಮಕೈಗೊಂಡಿದೆ; (ವಿವರ ನೀಡುವುದು) | ತುಮಕೂರು ಜಿಲ್ಲೆಯ ಗ್ರಾಮೀಣ ಜನವಸತಿಗಳಲ್ಲಿ ಇದೂವರೆವಿಗೂ 1432 ನೀರು ಶುದ್ಧೀಕರಣ ಘಟಕಗಳನ್ನು ಸ್ಥಾಪನೆ ಮಾಡಲಾಗಿದೆ.<br><br>ಚಿಕ್ಕಬಳ್ಳಾಪುರ ಜಿಲ್ಲೆಯ ಗ್ರಾಮೀಣ ಜನವಸತಿಗಳಲ್ಲಿ ಇದೂವರೆವಿಗೂ 576 ನೀರು ಶುದ್ಧೀಕರಣ ಘಟಕಗಳನ್ನು ಸ್ಥಾಪನೆ ಮಾಡಲಾಗಿದೆ. |
| ಇ. | ರಾಜ್ಯದ ಬರಪೀಡಿತ ಹಾಗೂ ಮಳೆ ನೆರಳಿನ ಪ್ರದೇಶಗಳಾದ ತುಮಕೂರಿನ ಬಹುತೇಕ ತಾಲ್ಲೂಕುಗಳಲ್ಲಿ ಎಷ್ಟು ಶುದ್ಧ ಕುಡಿಯುವ ನೀರಿನ ಘಟಕ ಸ್ಥಾಪಿಸಲಾಗಿದೆ; ಇವುಗಳಲ್ಲಿ ಎಷ್ಟು ಘಟಕಗಳು ಕಾರ್ಯನಿರ್ವಹಿಸುತ್ತಿವೆ ಹಾಗೂ ಎಷ್ಟು ಘಟಕಗಳು ನಿರ್ವಹಣೆ ಇಲ್ಲದೆ ಸಂಪೂರ್ಣ ಹಾಳಾಗಿವೆ; ಇವುಗಳ ದುರಸ್ಥಿಗೆ ಯಾವ ಕ್ರಮ ಕೈಗೊಳ್ಳಲಾಗಿದೆ? (ವಿವರ ಸಹಿತ ಮಾಹಿತಿ ನೀಡುವುದು) | ತುಮಕೂರು ಜಿಲ್ಲೆಯ ಗ್ರಾಮೀಣ ಜನವಸತಿಗಳಲ್ಲಿ ಇದೂವರೆವಿಗೂ 1432 ನೀರು ಶುದ್ಧೀಕರಣ ಘಟಕಗಳನ್ನು ಸ್ಥಾಪನೆ ಮಾಡಲಾಗಿದ್ದು, ಈ ಪೈಕಿ 1154 ಘಟಕಗಳು ಕಾರ್ಯನಿರ್ವಹಿಸುತ್ತಿದ್ದು, 278 ಘಟಕಗಳು ತಾತ್ಕಾಲಿಕವಾಗಿ ದುರಸ್ತಿಯಲ್ಲಿರುತ್ತವೆ.<br>• ತುಮಕೂರು ಜಿಲ್ಲೆ ವ್ಯಾಪ್ತಿಯಲ್ಲಿ ಗ್ರಾಮೀಣ ಕುಡಿಯುವ ನೀರು & ನೈರ್ಮಲ್ಯ ಇಲಾಖೆಯ ಟೆಂಡರ್ ಮುಖೇನ, ಕೆ.ಆರ್.ಐ.ಡಿ.ಎಲ್.ಸಂಸ್ಥೆ ಮುಖೇನ, ಸಹಕಾರ ಸಂಘ/ಸಂಸ್ಥೆ ಮುಖೇನ ಮತ್ತು ಗ್ರಾಮ ಪಂಚಾಯತಿ ಮಟ್ಟದಲ್ಲಿ ಇತರೆ ಅನುದಾನದಲ್ಲಿ ಅನುಷ್ಠಾನಗೊಳಿಸಿರುವ ಘಟಕಗಳ ಪೈಕಿ, ನಿರ್ವಹಣೆ ಅವಧಿ ಮುಗಿದಿರುವ/ ನಿರ್ವಹಣೆ ಸಮಸ್ಯೆ ಇರುವ 272 ಘಟಕಗಳನ್ನು 3 ಪ್ಯಾಕೇಜ್ ಮಾಡಿ ಜಿಲ್ಲಾಮಟ್ಟದಲ್ಲಿ ನಿಯಮಾನುಸಾರ ಟೆಂಡರ್ ಕರೆಯಲಾಗಿದ್ದು, 272 ನೀರು ಶುದ್ಧೀಕರಣ ಘಟಕಗಳಿಗೆ ಟೆಂಡರ್‌ನಲ್ಲಿ ಅನುಮೋದನೆಯಾದ ಸಂಸ್ಥೆ/ಗುತ್ತಿಗೆದಾರರಿಗೆ ಮುಂದಿನ 5 ವರ್ಷಗಳ ನಿರ್ವಹಣೆಗಾಗಿ ಹಸ್ತಾಂತರ ಮಾಡಲು ಕ್ರಮವಹಿಸಲಾಗಿದೆ.<br>• ರಾಜ್ಯದ ಗ್ರಾಮೀಣ ಜನವಸತಿಗಳಲ್ಲಿ ಅನುಷ್ಠಾನಗೊಳಿಸಿರುವ ಎಲ್ಲಾ ನೀರು ಶುದ್ಧೀಕರಣ ಘಟಕಗಳನ್ನು M/s IPSOS Research Private Ltd., ಎಂಬ ಸಂಸ್ಥೆಯಿಂದ ಘಟಕಗಳ ಸರ್ವೆ ಮಾಡಲು ದಿನಾಂಕ:24.01.2020ರಂದು ಕಾರ್ಯದೇಶ ನೀಡಿದ್ದು, ಪ್ರತಿ ಘಟಕದ ವಿವರವಾದ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಲು ಸೂಚನೆ ನೀಡಲಾಗಿದೆ.<br>ತಾತ್ಕಾಲಿಕವಾಗಿ ದುರಸ್ಥಿಯಲ್ಲಿರುವ ಎಲ್ಲಾ ಘಟಕಗಳನ್ನು NRDWP, ಟಾಸ್ಕ್ ಫೋರ್ಸ್ ಹಾಗೂ ಇತರೆ ಅನುದಾನ ಬಳಸಿಕೊಂಡು, ದುರಸ್ಥಿಗೊಳಿಸಿ, ಸಾರ್ವಜನಿಕರಿಗೆ ಶುದ್ಧ ಕುಡಿಯುವ ನೀರನ್ನು ಒದಗಿಸಲು ಸೂಚನೆ ನೀಡಿದೆ. |

ಕಡತ ಸಂ:ಗ್ರಾಕುನೀ&ನೈಇ 38 ಗ್ರಾನೀಸ(5)20

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಅನುಬಂಧ-1

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 349 (385)ರ ಲಗತ್ತು :

ಕಳೆದ ಮೂರು ವರ್ಷಗಳಲ್ಲಿ ನೀರು ಶುದ್ಧೀಕರಣ ಘಟಕಗಳನ್ನು ಅಳವಡಿಸಲು ಮಂಜೂರು ಮಾಡಿರುವ ಜಿಲ್ಲಾವಾರು ವಿವರ:

| ಕ್ರಸಂ | ಜಿಲ್ಲೆ / ವಿಭಾಗ | ಮಂಜೂರು ಮಾಡಿರುವ ಘಟಕಗಳ ವಿವರ |
|---|---|---|
| 1 | ಬಾಗಲಕೋಟೆ | 150 |
| 2 | ಬೆಳಗಾಂ | 598 |
| 3 | ಚಿಕ್ಕೋಡಿ | 169 |
| 4 | ಧಾರವಾಡ | 207 |
| 5 | ಗದಗ | 217 |
| 6 | ಹಾವೇರಿ | 336 |
| 7 | ವಿಜಯಪುರ | 385 |
| 8 | ಉತ್ತರ ಕನ್ನಡ | 137 |
| 9 | ಬಳ್ಳಾರಿ | 194 |
| 10 | ಬೀದರ್ | 190 |
| 11 | ಕಲಬುರಗಿ | 174 |
| 12 | ಕೊಪ್ಪಳ | 223 |
| 13 | ರಾಯಚೂರು | 116 |
| 14 | ಯಾದಗಿರಿ | 110 |
| 15 | ಚಾಮರಾಜನಗರ | 134 |
| 16 | ಚಿಕ್ಕಮಗಳೂರು | 120 |
| 17 | ದಕ್ಷಿಣಕನ್ನಡ | 136 |
| 18 | ಹಾಸನ | 275 |
| 19 | ಕೊಡಗು | 13 |
| 20 | ಮೈಸೂರು | 382 |
| 21 | ಮಂಡ್ಯ | 359 |
| 22 | ಉಡುಪಿ | 59 |
| 23 | ಬೆಂಗಳೂರು(ಗ್ರಾ) | 153 |
| 24 | ಬೆಂಗಳೂರು(ನ) | 200 |
| 25 | ಚಿಕ್ಕಬಳ್ಳಾಪುರ | 127 |
| 26 | ಚಿತ್ರದುರ್ಗ | 413 |
| 27 | ದಾವಣಗೆರೆ | 326 |
| 28 | ಕೋಲಾರ | 194 |
| 29 | ರಾಮನಗರ | 103 |
| 30 | ಶಿವಮೊಗ್ಗ | 149 |
| 31 | ತುಮಕೂರು | 452 |
| ಒಟ್ಟು : | | 6801 |